ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ ಸ್ಥಾಪನೆ ಉದ್ದೇಶ ಹಾಗೂ ಮಹತ್ವದ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

922(1149) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ (VTPC) ವನ್ನು ಯಾವಾಗ ಸ್ಥಾಪನೆ ಮಾಡಲಾಯಿತು; ಇದರ ಧ್ಯೇಯೋದ್ದೇಶಗಳೇನು; (ವಿವರವಾದ ಮಾಹಿತಿ ನೀಡುವುದು)

(ಆ) ಕಸ್ತೂರಿ ಬಾ ರಸ್ತೆಯಲ್ಲಿರುವ ಸ್ವಂತ ಕಟ್ಟಡದ ಕೇಂದ್ರ ಕಛೇರಿಯನ್ನು ಶಾಂತಿನಗರದ ಬಾಡಿಗೆ ಕಟ್ಟಡಕ್ಕೆ ಸ್ಥಳಾಂತರಿಸಲು ಕಾರಣಗಳೇನು; (ವಿವರವಾದ ಮಾಹಿತಿ ನೀಡುವುದು)

(ಇ) ಶಾಂತಿನಗರದ ಕಛೇರಿಯ ವಾರ್ಷಿಕ ಬಾಡಿಗೆ ಎಷ್ಟು; ಈಗಾಗಲೇ ಎಷ್ಟು ಹಣ ಪಾವತಿ ಮಾಡಲಾಗಿದೆ; ಈ ಹಣದಲ್ಲಿ ಕಸ್ತೂರಿ ಬಾ ರಸ್ತೆಯಲ್ಲಿ ಸುಸಜ್ಜಿತ ಸ್ವಂತ ಕಟ್ಟಡವನ್ನು ನಿರ್ಮಿಸಬಹುದಿತ್ತಲ್ಲವೇ; (ವಿವರವಾದ ಮಾಹಿತಿ ನೀಡುವುದು)

(ಈ) ರಾಜ್ಯದಲ್ಲಿ ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ (VTPC) ದಲ್ಲಿರುವ ಆಸ್ತಿಗಳು ಎಷ್ಟು; ಅವುಗಳು ಎಲ್ಲೆಲ್ಲಿ ಇವೆ; ಅವುಗಳ ಇವತ್ತಿನ ಮೌಲ್ಯವೇನು; ಇವುಗಳನ್ನು ಯಾರಾದರೂ ಒತ್ತುವರಿ ಮಾಡಿದ್ದಾರೆಯೇ; (ವಿವರವಾದ ಮಾಹಿತಿ ನೀಡುವುದು)

(ಉ) ಕಳೆದ 3 ವರ್ಷಗಳಲ್ಲಿ ಈ ಸಂಸ್ಥೆಯು ಖರ್ಚು ಮಾಡಿದ ಹಣವೆಷ್ಟು; ಮೂರು ವರ್ಷಗಳಲ್ಲಿ ಸಂಸ್ಥೆಯ ಕೊಡುಗೆ ಏನು; ಯಾವ ಯಾವ ಕಾರ್ಯಕ್ರಮಗಳನ್ನು ಮಾಡಲಾಗಿದೆ ? (ವಿವರವಾದ ಮಾಹಿತಿ ನೀಡುವುದು)